**ಆರ್ಥಿಕ ಸಚಿವಾಲಯ**

**ಅಧಿಸೂಚನೆ–III**

**ಸಂಖ್ಯೆ: ಎಫ್‌ಡಿ 02 ಎಸ್‌ಆರ್‌ಎ 2015, ಬೆಂಗಳೂರು, ದಿನಾಂಕ: 07.01.2016**

ಕರ್ನಾಟಕ ಸಿವಿಲ್ ಸೇವೆಗಳ (ಅಸಾಧಾರಣ ನಿವೃತ್ತಿ ವೇತನ) ನಿಯಮಗಳು 2003ಕ್ಕೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮ ಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು/ಸಲಹೆಗಳನ್ನು ಅಹ್ವಾನಿಸಿ, ದಿನಾಂಕ: 06.10.2015ರಂದು ಕರ್ನಾಟಕ ರಾಜ್ಯಪತ್ರದ ಭಾಗ–IV-ಎ ರಲ್ಲಿ ಅಧಿಸೂಚನೆ ಸಂಖ್ಯೆ:ಎಫ್‌ಡಿ 02 ಎಸ್‌ಆರ್‌ಎ 2015, ದಿನಾಂಕ:06.10.2015 ನ್ನು ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪಕರಣ 8ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ(ಎ)ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ:06.10.2015ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆ ಗಳು ಬಂದಿರುವುದಿಲ್ಲವಾದ್ದರಿಂದ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪಕರಣದ (1)ನೇ ಉಪ ಪಕರಣದಿಂದ ಪದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮ ಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:–

**ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳ (ಅಸಾಧಾರಣ ನಿವೃತ್ತಿ ವೇತನ) (1ನೇ ತಿದ್ದುಪಡಿ) ನಿಯಮಗಳು, 2016 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 2ರ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವೆಗಳ (ಅಸಾಧಾರಣ ನಿವೃತ್ತಿ ವೇತನ) ( ತಿದ್ದುಪಡಿ) ನಿಯಮಗಳು, 2003ರ, ನಿಯಮ 2 ರಲ್ಲಿ, ಉಪ ನಿಯಮ 6ರ, ಖಂಡ (ಬಿ)ಯ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಅಂದರೆ:–

"(ಸಿ) ಒಂದೇ ಹುದ್ದೆಯಲ್ಲಿ 20 ವರ್ಷಗಳ ಸೇವೆ, 25 ವರ್ಷಗಳ ಸೇವೆ ಹಾಗೂ 30 ವರ್ಷಗಳ ಸೇವೆ ಪೂರ್ಣಗೊಳಿಸಿದಲ್ಲಿ, ಗರಿಷ್ಠ ಕಾಲಿಕ ವೇತನ ಶ್ರೇಣಿಯನ್ನು ಮೀರಿದಾಗ ಮಂಜೂರಾದ ಹೆಚ್ಚುವರಿ ವೇತನ ಬಡ್ತಿಗಳು."

3. **ನಿಯಮ 8ರ ತಿದ್ದುಪಡಿ.**– ಸದರಿ ನಿಯಮಗಳ ನಿಯಮ 8ರಲ್ಲಿ, ಉಪ ನಿಯಮ 3ರ, ಖಂಡ(ಎ) ರಲ್ಲಿ ಬರುವ "II ನೇ ಅನುಸೂಚಿ" ಎಂಬ ಪದಗಳು ಮತ್ತು ಅಂಕಿಗಳ ಬದಲಿಗೆ "ಅನುಸೂಚಿ– II (ಎ) ಮತ್ತು ಅನುಸೂಚಿ - II (ಬಿ)" ಎಂಬ ಪದಗಳು, ಅಂಕಿ, ಆವರಣಗಳು ಮತ್ತು ಅಕ್ಷರವನ್ನು ಕ್ರಮವಾಗಿ 2005ರ ಜುಲೈ ಮೊದಲನೇ ದಿನದಿಂದ ಮತ್ತು 2012ರ ಏಪ್ರಿಲ್ ಮೊದಲನೇ ದಿನದಿಂದ ಜಾರಿಗೆ ಬರುವಂತೆ ಸೇರ್ಪಡೆ ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

4. **ಅನುಸೂಚಿ– II (ಎ) ಮತ್ತು ಅನುಸೂಚಿ - II (ಬಿ)ರ ಸೇರ್ಪಡೆ.**– ಅನುಸೂಚಿ-II ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಅಂದರೆ:–

**"ಅನುಸೂಚಿ–II(ಎ)**

**ಅಸಮರ್ಥತಾ ನಿವೃತ್ತಿ ವೇತನ**

1. ಶೇ.100% ರಷ್ಟು ಅಸಮರ್ಥತೆಗಾಗಿ ನಿವೃತ್ತಿ ವೇತನವು ತಿಂಗಳಿಗೆ ಕನಿಷ್ಠ ರೂ.2250/– ಮತ್ತು ಗರಿಷ್ಠ ರೂ.11,970/– ಗಳಿಗೆ ಒಳಪಟ್ಟು ವೇತನದ ಶೇಕಡ 30ಕ್ಕೆ ಸಮನಾದ ದರದಲ್ಲಿ ಅನ್ವಯವಾಗತಕ್ಕದ್ದು.
2. ಅತಿ ಕಡಿಮೆ ಅಸಮರ್ಥತೆಯ ಶೇಕಡಾವಾರು ಪ್ರಮಾಣವು ಇದ್ದರೆ, ಮಾಸಿಕ ನಿವೃತ್ತಿ ವೇತನವು, ಈಗಿರುವ ವೇತನಕ್ಕಿಂತ ಪ್ರಮಾಣಾನುಸಾರವಾಗಿ ಕಡಿಮೆಯಾಗಿರತಕ್ಕದ್ದು.

**ಅನುಸೂಚಿ–II(ಬಿ)**

**ಅಸಮರ್ಥತಾ ನಿವೃತ್ತಿ ವೇತನ**

1. ಶೇ.100% ರಷ್ಟು ಅಸಮರ್ಥತೆಗಾಗಿ ನಿವೃತ್ತಿ ವೇತನವು ತಿಂಗಳಿಗೆ ಕನಿಷ್ಠ ರೂ.4,800/– ಮತ್ತು ಗರಿಷ್ಠ ರೂ.23,940/– ಗಳಿಗೆ ಒಳಪಟ್ಟು ವೇತನದ ಶೇಕಡ 30ಕ್ಕೆ ಸಮನಾದ ದರದಲ್ಲಿ ಅನ್ವಯವಾಗತಕ್ಕದ್ದು.
2. ಅತಿ ಕಡಿಮೆ ಅಸಮರ್ಥತೆಯ ಶೇಕಡಾವಾರು ಪ್ರಮಾಣವು ಇದ್ದರೆ, ಮಾಸಿಕ ನಿವೃತ್ತಿ ವೇತನವು, ಈಗಿರುವ ವೇತನಕ್ಕಿಂತ ಪ್ರಮಾಣಾನುಸಾರವಾಗಿ ಕಡಿಮೆಯಾಗಿರತಕ್ಕದ್ದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹೇಮಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ(ಸೇವೆಗಳು–1)

**ತಿದ್ದುಪಡಿ ಸಂಖ್ಯೆ: 8**

**FINANCE SECRETARIAT**

**NOTIFICATION-III**

**No. FD 02 SRA 2015, Bengaluru, Dated: 07.01.2016**

Whereas the draft of the following rules further to amend the Karnataka Civil Services (Extraordinary Pension) Rules 2003, was published as required by clause(a) of sub-section-(2) of Section 3, read with section 8 of the Karnataka State Civil Services Act, 1978 (Karnataka Act 14 of 1990) in Notification No. FD 02 SRA 2015, dated 06.10.2015 in Part IV-A of the Karnataka Gazette dated 06.10.2015 inviting objections and suggestions from all persons likely to be affected thereby within fifteen days from the date of its publication in the Official Gazette.

Whereas the said Gazette was made available to the public on 06.10.2015.

And whereas, no objections and suggestions have been received by the State Government.

Now, therefore, in exercise of the powers conferred by sub-section(1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely:-

**Rules**

**1. Title and commencement.-** (1) These rules may be called the Karnataka Civil Services (Extraordinary Pension) (1st Amendment) Rules, 2016.

(2) They shall come into force from the date of their publication in the Official Gazette.

**2. Amendment of rule 2.-** In the Karnataka Civil Services (Extraordinary Pension) Rules, 2003, in rule 2, in sub-rule (6) after item (b) the following shall be inserted, namely:-

"(c) Additional increments granted beyond the maximum of the time scale of Pay for having completed 20 years of service, 25 years of service and 30 years of service in the same cadre."

**3. Amendment of rule 8.-** In rule 8 of the said rules, in sub-rule (3), in clause (a), after the words and figures "Schedule-II", the words, figure, brackets and letter "Schedule-II (a) and Schedule-II(b)" shall be deemed to have been inserted with effect from 1st day of July 2005 and 1st day of April 2012 respectively.

4. **Insertion of Schedule II(a) and II(b).-** After schedule II and the entries relating thereto, the following shall be inserted, namely:-

**"Schedule-II (a)**

**Disability Pension**

1. Disability Pension for 100% disability shall be allowed at a rate equal to 30% of the pay subject to minimum of Rs.2250/- and maximum of Rs.11970/- per month.

2. For lower percentage of disability, the monthly pension shall be proportionately lower as at present.

**Schedule-II (b)**

**Disability Pension**

1. Disability Pension for 100% disability shall be allowed at 30% of the pay subject to minimum of Rs.4800/- and maximum of Rs.23940/- per month.

2. For lower percentage of disability, the monthly pension shall be proportionately lower as at present."

By order and in the name of the Governor of Karnataka,

**G.B. HEMANNA**
Under Secretary to Government
Finance Department(Services-1)

**C.S. No: 2**

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) ೮೦೦ ಪ್ರತಿಗಳು)

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– V | ಬೆಂಗಳೂರು,. ಶುಕ್ರವಾರ, ಜನವರಿ ೦೧, ೨೦೧೬ (ಪುಷ್ಯ ೧೧, ಶಕ ವರ್ಷ ೧೯೩೭) | ನಂ. ೧೬ |
|---|---|---|
| Part– V | Bengaluru, Friday, January 01, 2016 (Pushya 11, Shaka Varsha 1937) | No. 16 |

**ಕರ್ನಾಟಕ ವಿಧಾನ ಪರಿಷತ್ತು**

**ಅಧಿಸೂಚನೆ**

**ಸಂಖ್ಯೆ: ಕವಿಪ:ಆ–1:46:ಖಾಹುಭ:2015, ಬೆಂಗಳೂರು, ದಿನಾಂಕ: 01.01.2016**

ವಿಷಯ: ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಖಾಲಿ ಇರುವ ವರದಿಗಾರರು/ವಾಹನ ಚಾಲಕರು/ ಗ್ರೂಪ್ 'ಡಿ' ನೌಕರರು ಮತ್ತು ಸೆಕ್ಯೂರಿಟಿ ಗಾರ್ಡ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

*****

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಗಳು 2003ರ ತಿದ್ದುಪಡಿ ಅಧಿಸೂಚನೆ 2005 ಮತ್ತು 2011ರ ರೀತ್ಯಾ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಖಾಲಿ ಇರುವ ವರದಿಗಾರರು/ವಾಹನ ಚಾಲಕರು/ಗ್ರೂಪ್ 'ಡಿ' ನೌಕರರು ಮತ್ತು ಸೆಕ್ಯೂರಿಟಿ ಗಾರ್ಡ್ ಹುದ್ದೆಗಳಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ವಿವರ ಈ ಕೆಳಕಂಡಂತಿರುತ್ತದೆ.

**ವರದಿಗಾರರು : 10 ಕನ್ನಡ ಹಾಗೂ 06 ಆಂಗ್ಲ ಭಾಷೆ**

**ವರದಿಗಾರರ ಹುದ್ದೆಗಳ ಮೀಸಲಾತಿ ವರ್ಗೀಕರಣ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ)**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | 01 | – | – | – | – | – | – | 01 |
| 02 | ಪರಿಶಿಷ್ಟ ವರ್ಗ | 01 | – | – | – | – | – | – | 01 |
| 03 | ಸಾಮಾನ್ಯ | 01 | – | – | – | – | – | – | 01 |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | – | – | – | – | – | – | – |
| 06 | ಪ್ರವರ್ಗ–2ಬಿ | – | – | – | – | – | – | – | – |
| 07 | ಪ್ರವರ್ಗ–3ಎ | – | – | – | – | – | – | – | – |
| 08 | ಪ್ರವರ್ಗ–3ಬಿ | – | – | – | – | – | – | – | – |
| | ಒಟ್ಟು | 03 | – | – | – | – | – | – | 03 |

**ವರದಿಗಾರರ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | – | 01 | 01 | – | – | – | – | 02 |
| 02 | ಪರಿಶಿಷ್ಟ ವರ್ಗ | – | – | – | – | – | – | – | – |
| 03 | ಸಾಮಾನ್ಯ | 01 | 02 | 02 | 01 | – | – | – | 06 |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | 01 | 01 | – | – | – | – | 02 |
| 06 | ಪ್ರವರ್ಗ–2ಬಿ | 01 | – | – | – | – | – | – | 01 |
| 07 | ಪ್ರವರ್ಗ–3ಎ | 01 | – | – | – | – | – | – | 01 |
| 08 | ಪ್ರವರ್ಗ–3ಬಿ | 01 | – | – | – | – | – | – | 01 |
| | ಒಟ್ಟು | 04 | 04 | 04 | 01 | – | – | – | 13 |

**ವಾಹನ ಚಾಲಕರ ಮೀಸಲಾತಿ ವರ್ಗೀಕರಣ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ)**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | 01 | – | – | – | – | – | – | 01 |
| 02 | ಪರಿಶಿಷ್ಟ ವರ್ಗ | – | – | – | – | – | – | – | – |
| 03 | ಸಾಮಾನ್ಯ | 01 | – | – | – | – | – | – | 01 |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | – | – | – | – | – | – | – |
| 06 | ಪ್ರವರ್ಗ–2ಬಿ | – | – | – | – | – | – | – | – |
| 07 | ಪ್ರವರ್ಗ–3ಎ | – | – | – | – | – | – | – | – |
| 08 | ಪ್ರವರ್ಗ–3ಬಿ | – | – | – | – | – | – | – | – |
| | ಒಟ್ಟು | 02 | – | – | – | – | – | – | 02 |

**ವಾಹನ ಚಾಲಕರ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | – | – | – | – | – | – | – | – |
| 02 | ಪರಿಶಿಷ್ಟ ವರ್ಗ | – | – | – | – | – | – | – | – |
| 03 | ಸಾಮಾನ್ಯ | – | – | 01 | – | – | – | – | 01 |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | – | – | – | – | – | – | – |
| 06 | ಪ್ರವರ್ಗ–2ಬಿ | – | – | – | – | – | – | – | – |
| 07 | ಪ್ರವರ್ಗ–3ಎ | – | – | – | – | – | – | – | – |
| 08 | ಪ್ರವರ್ಗ–3ಬಿ | – | – | – | – | – | – | – | – |
| | ಒಟ್ಟು | – | – | 01 | – | – | – | – | 01 |

**ಗ್ರೂಪ್ 'ಡಿ' ಹುದ್ದೆಗಳ ಮೀಸಲಾತಿ ವರ್ಗೀಕರಣ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ)**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | 01 | – | – | – | – | – | – | 01 |
| 02 | ಪರಿಶಿಷ್ಟ ವರ್ಗ | – | – | – | – | – | – | – | – |
| 03 | ಸಾಮಾನ್ಯ | – | – | – | – | – | – | – | – |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | – | – | – | – | – | – | – |
| 06 | ಪ್ರವರ್ಗ–2ಬಿ | – | – | – | – | – | – | – | – |
| 07 | ಪ್ರವರ್ಗ–3ಎ | – | – | – | – | – | – | – | – |
| 08 | ಪ್ರವರ್ಗ–3ಬಿ | – | – | – | – | – | – | – | – |
| | ಒಟ್ಟು | 01 | – | – | – | – | – | – | 01 |

**ಸೆಕ್ಯೂರಿಟಿ ಗಾರ್ಡ್–1 ಹುದ್ದೆ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | – | – | – | – | – | – | – | – |
| 02 | ಪರಿಶಿಷ್ಟ ವರ್ಗ | – | – | – | – | – | – | – | – |
| 03 | ಸಾಮಾನ್ಯ | 01 | – | – | – | – | – | – | 01 |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | – | – | – | – | – | – | – |
| 06 | ಪ್ರವರ್ಗ–2ಬಿ | – | – | – | – | – | – | – | – |
| 07 | ಪ್ರವರ್ಗ–3ಎ | – | – | – | – | – | – | – | – |
| 08 | ಪ್ರವರ್ಗ–3ಬಿ | – | – | – | – | – | – | – | – |
| | ಒಟ್ಟು | 01 | – | – | – | – | – | – | 01 |

**ಗ್ರೂಪ್ 'ಡಿ' ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋ–ನಿ | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | – | – | 01 | – | – | – | – | 01 |
| 02 | ಪರಿಶಿಷ್ಟ ವರ್ಗ | – | – | – | – | – | – | – | – |
| 03 | ಸಾಮಾನ್ಯ | 01 | 01 | 01 | – | – | – | – | 03 |
| 04 | ಪ್ರವರ್ಗ–I | – | – | – | – | – | – | – | – |
| 05 | ಪ್ರವರ್ಗ–2ಎ | – | 01 | – | – | – | – | – | 01 |
| 06 | ಪ್ರವರ್ಗ–2ಬಿ | 01 | – | – | – | – | – | – | 01 |
| 07 | ಪ್ರವರ್ಗ–3ಎ | 01 | – | – | – | – | – | – | 01 |
| 08 | ಪ್ರವರ್ಗ–3ಬಿ | – | – | – | – | – | – | – | – |
| | ಒಟ್ಟು | 03 | 02 | 02 | – | – | – | – | 07 |

01. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: **30.01.2016**

02. ಅರ್ಜಿ ಸಲ್ಲಿಸಬೇಕಾದ ವಿಳಾಸ: ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ: 5079, ಮೊದಲನೆ ಮಹಡಿ, ವಿಧಾನಸೌಧ, ಬೆಂಗಳೂರು–560001.

03. ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ನಿಯಮಾವಳಿಗನುಸಾರ ಮೇಲ್ಕಂಡ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳು ಅರ್ಜಿ ನಮೂನೆ–1ರ ದ್ವಿಪ್ರತಿಯಲ್ಲಿ ಅರ್ಜಿಗಳನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದ ಪಡೆದು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಸಲ್ಲಿಸಬೇಕು.

**04. ಶುಲ್ಕ:**

ಅ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕವಿರುವುದಿಲ್ಲ.

ಆ) ಕನ್ನಡ/ಆಂಗ್ಲ ವರದಿಗಾರರು ಮತ್ತು ವಾಹನ ಚಾಲಕರ ಹುದ್ದೆಗಳಿಗೆ ಸಂಬಂಧಪಟ್ಟಂತೆ ಸಾಮಾನ್ಯ ಮತ್ತು ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳು ರೂ.300.00ಗಳ ಹಾಗೂ ಗ್ರೂಫ್ 'ಡಿ' ಮತ್ತು ಸೆಕ್ಯೂರಿಟಿ ಗಾರ್ಡ್ ಹುದ್ದೆಗೆ ರೂ. 150.00ಗಳ ಡಿ.ಡಿ. ಅಥವಾ ಪೇ ಆರ್ಡರ್ ಅನ್ನು ಅರ್ಜಿ ಸಲ್ಲಿಸುವ ದಿನಾಂಕದ 15 ದಿನಗಳೊಳಗಿರುವಂತೆ ಖರೀದಿಸಿ ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ: 5079, ವಿಧಾನಸೌಧ, ಬೆಂಗಳೂರು – 560 001 ಈ ವಿಳಾಸಕ್ಕೆ ಪಾವತಿ ಮಾಡಬೇಕು. ಅರ್ಜಿ ಶುಲ್ಕವನ್ನು ಒಮ್ಮೆ ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

**05. ವಿದ್ಯಾರ್ಹತೆ:**

| ಕ್ರ. ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ವಿದ್ಯಾರ್ಹತೆ |
|---|---|---|---|---|
| **01** | ವರದಿಗಾರ | 20000–500–21000–600–24600–700–28800–800–33600–900–36300 | **16** | <u>ಆಂಗ್ಲ ವರದಿಗಾರರು</u><br>ಅ) ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿಯನ್ನು ಹೊಂದಿರಬೇಕು.<br>ಆ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸಿರುವ ಆಂಗ್ಲ ಶೀಘ್ರಲಿಪಿ ಪ್ರವೀಣ ದರ್ಜೆ ಹಾಗೂ ಬೆರಳಚ್ಚು ಹಿರಿಯ ದರ್ಜೆ ಪರೀಕ್ಷೆಗಳಲ್ಲಿ ಉತ್ತೀರ್ಣ ರಾಗಿರತಕ್ಕದ್ದು ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು. ಹಿಂದಿ ಶೀಘ್ರಲಿಪಿ ಪ್ರವೀಣ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಆದ್ಯತೆ ನೀಡಲಾಗುವುದು.<br><u>ಕನ್ನಡ ವರದಿಗಾರರು</u><br>ಅ) ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿಯನ್ನು ಹೊಂದಿರಬೇಕು.<br>ಆ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸಿರುವ ಕನ್ನಡ್ರ ಶೀಘ್ರಲಿಪಿ ಪ್ರವೀಣ ದರ್ಜೆ ಹಾಗೂ ಬೆರಳಚ್ಚು ಹಿರಿಯ ದರ್ಜೆ ಪರೀಕ್ಷೆಗಳಲ್ಲಿ ಉತ್ತೀರ್ಣ ರಾಗಿರತಕ್ಕದ್ದು ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು. ಹಿಂದಿ ಶೀಘ್ರಲಿಪಿ ಪ್ರವೀಣ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಆದ್ಯತೆ ನೀಡಲಾಗುವುದು. |

| ಕ್ರ. ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ವಿದ್ಯಾರ್ಹತೆ |
|---|---|---|---|---|
| **02** | **ವಾಹನ ಚಾಲಕರು** | 11600–200–12000–250–13000–300–14200–350–15600–400–17200–450–19000–500–21000 | **03** | ಅ)ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು. ಪ್ರಥಮ ಚಿಕಿತ್ಸಾ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.<br>ಆ)ಮೋಟಾರು ಕಾರು/ಭಾರಿ ವಾಹನ ಚಾಲನಾ ಪರಿಣಿತಿಯನ್ನು ಹೊಂದಿರತಕ್ಕದ್ದು.<br>ಇ) ವಾಹನ ಚಾಲನಾ ಪರಿಣಿತಿಯ ಬಗ್ಗೆ ಕನಿಷ್ಠಪಕ್ಷ 03 ವರ್ಷಗಳ ಅನುಭವ ಹೊಂದಿರತಕ್ಕದ್ದು. |
| **03** | **ಸೆಕ್ಯೂರಿಟಿ ಗಾರ್ಡ್** | 9600–200–12000–250–13000–300–14200–350–14550 | **01** | 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. |
| **04** | **ಗ್ರೂಪ್ 'ಡಿ'** | 9600–200–12000–250–13000–300–14200–350–14550 | **08** | 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. |

**06. ಕನಿಷ್ಠ ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿ:–**

| | | |
|---|---|---|
| ಸಾಮಾನ್ಯ ವರ್ಗ | : | 35 ವರ್ಷ |
| ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ | : | 38 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ – I | : | 40 ವರ್ಷ |

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 6(3)ರಲ್ಲಿ ತಿಳಿಸಲಾಗಿರುವ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿಯಲ್ಲಿ ರಿಯಾಯಿತಿ ನೀಡಲಾಗುವುದು.

**07.** ಸರ್ಕಾರಿ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದ ಮೂಲಕ ನಿಗದಿತ ದಿನಾಂಕದೊಳಗೆ ಅರ್ಜಿ ಸಲ್ಲಿಸಬೇಕು.

**08.** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ ರಾಜ್ಯ ಸಿವಿಲ್ ಸೇವೆಗಳಲ್ಲಿ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹತೆ ಹೊಂದಿರುವ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗಿರುತ್ತಾರೆ.

**09.** ಆಯ್ಕೆಯಾದ ಯಾವುದೇ ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರಕ್ಕೆ ಅವನು/ಅವಳು ನೇಮಿಸಿರುವ ಕೆಲಸಕ್ಕೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಯೋಗ್ಯವೆನಿಸಿದ ಹೊರತು ಅವನನ್ನು/ಅವಳನ್ನು ಆ ಹುದ್ದೆಗೆ ನೇಮಿಸಲಾಗುವುದಿಲ್ಲ.

**10.** ಯಾವುದೇ ವ್ಯಕ್ತಿಯು ತನ್ನ ಉಮೇದುವಾರಿಕೆ ಬಗ್ಗೆ ಅಧಿಕಾರಿಗಳು ಮತ್ತು ಅಧಿಕಾರೇತರರುಗಳ ಒತ್ತಡ ತಂದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**11.** ಅಭ್ಯರ್ಥಿಗಳು ಅರ್ಜಿಯೊಂದಿಗೆ ಈ ಕೆಳಗೆ ತಿಳಿಸಲಾಗಿರುವ ದಾಖಲೆಗಳ ದ್ವಿಪ್ರತಿಗಳನ್ನು ಲಗತ್ತಿಸಬೇಕು.

(ಅ) ಹುಟ್ಟಿದ ತಾರೀಖಿಗೆ ಆಧಾರದ ದಾಖಲೆ ಪ್ರತಿ.

(ಆ) ಹುದ್ದೆಗೆ ಸೂಚಿಸಲಾಗಿರುವ ವಿದ್ಯಾರ್ಹತೆಗಳಿಗೆ ಸಂಬಂಧಿಸಿದ ಪ್ರಮಾಣ ಪತ್ರದ ನಕಲು ಪ್ರತಿ. (ಅಂಕಪಟ್ಟಿಗಳ ನಕಲು ಪ್ರತಿಗಳ ಸಮೇತ).

(ಇ) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವುದಕ್ಕೆ ಸಂಬಂಧಪಟ್ಟಂತೆ ದೃಢೀಕರಿಸುವ ಪ್ರಮಾಣ ಪತ್ರ.

(ಈ) ಜಾತಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸರ್ಕಾರದಿಂದ ನಿಗದಿಗೊಳಿಸಲ್ಪಟ್ಟಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(ಉ) ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವಂತೆ ಗಣ್ಯ ವ್ಯಕ್ತಿಗಳಿಂದ ಪಡೆದ ಇತ್ತೀಚಿನ ನಡವಳಿಕೆ ಹಾಗೂ ಶಾಲಾ ನಡವಳಿಕೆಯ ಪ್ರಮಾಣ ಪತ್ರ

(ಊ) 1 ರಿಂದ 10ನೇ ತರಗತಿಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿದ್ದಕ್ಕಾಗಿ ಸಂಬಂಧಪಟ್ಟ ಶಿಕ್ಷಣಾಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.

(ಋ) ಮಾಜಿ ಸೈನಿಕರು ಮತ್ತು ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವವರು ಸಂಬಂಧಪಟ್ಟ ಪ್ರಾಧಿಕಾರದಿಂದ ದೃಡೀಕರಣ ಪತ್ರ.

**ಸೂಚನೆ: ಅಭ್ಯರ್ಥಿಗಳು ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದಲ್ಲ.**

12. ಅರ್ಜಿಗಳನ್ನು ನಮೂನೆ–1ರ ದ್ವಿಪ್ರತಿಯಲ್ಲಿ ಅಗತ್ಯವುಳ್ಳ ದಾಖಲೆಗಳನ್ನು ಲಗತ್ತಿಸಿ, ಕೊನೆಯ ದಿನಾಂಕ:30.01.2016ರಂದು ಸಂಜೆ: 4.00 ಗಂಟೆಯ ಒಳಗಾಗಿ ಖುದ್ದಾಗಿ ಅಥವಾ ಅಂಚೆಯ ಮೂಲಕ ತಲುಪಿಸತಕ್ಕದ್ದು. ಸದರಿ ದಿನಾಂಕವು ಸಾರ್ವಜನಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನದಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.
13. 2003ನೇ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ರೀತ್ಯಾ ಸದರಿ ಹುದ್ದೆಗಳ ಆಯ್ಕೆ ಪ್ರಕ್ರಿಯೆಯು ಕಾರ್ಯ ವಿಧಾನವನ್ನು ನಿಗಧಿಪಡಿಸುವ ಅಧಿಕಾರ ಮಾನ್ಯ ಸಭಾಪತಿಯವರಿಗೆ ಇರುತ್ತದೆ.

**ಸೂಚನೆ: –**

01. ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ ನಂತರ ಆ ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
02. ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದೆ ಇರುವ ಹಾಗೂ ಲೋಪ/ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
03. ಅರ್ಜಿಗಳ ಮೇಲೆ ಹುದ್ದೆಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.
04. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಮಾನ್ಯ ಸಭಾಪತಿಯವರ ಆದೇಶಾನುಸಾರ,

**ಕೆ.ಸಿ. ಪ್ರಭು**
ಅಧೀನ ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL
## NOTIFICATION

**No. KLC/Adm-1/46/RVP/2015, Bengaluru, Dated: 01.01.2016**

**Sub**: Direct Recruitment to the vacant posts of Reporters/Drivers/'D' Group employees and Security Guards in the Karnataka Legislative Council- Reg.

***

Applications are invited for the vacant posts of Reporters/Drivers/'D' Group Employees and Security Guards in the Karnataka Legislative Council from eligible candidates as per the Amendment Notification, 2005 and 2011 of the Karnataka Legislative Council Secretariat (Recruitment and Conditions of Service) Rules, 2003. Details of the posts are as below:

**REPORTERS:10 KANNADA AND 06 ENGLISH LANGUAGE**

**CLASSIFICATION OF RESERVATION FOR THE POSTS OF REPORTERS**
**(Reservation in appointment for Hyderabad-Karnataka Region)**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | 01 | - | - | - | - | - | - | **01** |
| 02 | Scheduled Tribe | 01 | - | - | - | - | - | - | **01** |
| 03 | General | 01 | - | - | - | - | - | - | **01** |
| 04 | Category- I | - | - | - | - | - | - | - | **-** |
| 05 | Category-2A | - | - | - | - | - | - | - | **-** |
| 06 | Category-2B | - | - | - | - | - | - | - | **-** |
| 07 | Category-3A | - | - | - | - | - | - | - | **-** |
| 08 | Category-3B | - | - | - | - | - | - | - | **-** |
| | **Total** | **03** | **-** | **-** | - | - | - | - | **03** |

**CLASSIFICATION OF RESERVATION FOR THE POSTS OF REPORTERS**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | - | 01 | 01 | - | - | - | - | **02** |
| 02 | Scheduled Tribe | - | - | - | - | - | - | - | **-** |
| 03 | General | 01 | 02 | 02 | 01 | - | - | - | **06** |
| 04 | Category- I | - | - | - | - | - | - | - | **-** |
| 05 | Category-2A | - | 01 | 01 | - | - | - | - | **02** |
| 06 | Category-2B | 01 | - | - | - | - | - | - | **01** |
| 07 | Category-3A | 01 | - | - | - | - | - | - | **01** |
| 08 | Category-3B | 01 | - | - | - | - | - | - | **01** |
| | **Total** | **04** | **04** | **04** | **01** | **-** | **-** | **-** | **13** |

**CLASSIFICATION OF RESERVATION FOR THE POSTS OF DRIVERS**
**(Reservation in appointment for Hyderabad-Karnataka Region)**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | 01 | - | - | - | - | - | - | **01** |
| 02 | Scheduled Tribe | - | - | - | - | - | - | - | **-** |
| 03 | General | 01 | - | - | - | - | - | - | **01** |
| 04 | Category- I | - | - | - | - | - | - | - | **-** |
| 05 | Category-2A | - | - | - | - | - | - | - | **-** |
| 06 | Category-2B | - | - | - | - | - | - | - | **-** |
| 07 | Category-3A | - | - | - | - | - | - | - | **-** |
| 08 | Category-3B | - | - | - | - | - | - | - | **-** |
| | **Total** | **02** | **-** | **-** | **-** | **-** | **-** | **-** | **02** |

**CLASSIFICATION OF RESERVATION FOR THE POSTS OF DRIVERS**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | - | - | - | - | - | - | - | **-** |
| 02 | Scheduled Tribe | - | - | - | - | - | - | - | **-** |
| 03 | General | - | - | **01** | - | - | - | - | **01** |
| 04 | Category- I | - | - | - | - | - | - | - | **-** |
| 05 | Category-2A | - | - | - | - | - | - | - | **-** |
| 06 | Category-2B | - | - | - | - | - | - | - | **-** |
| 07 | Category-3A | - | - | - | - | - | - | - | **-** |
| 08 | Category-3B | - | - | - | - | - | - | - | **-** |
| | **Total** | **-** | **-** | **01** | **-** | **-** | **-** | **-** | **01** |

**CLASSIFICATION OF RESERVATION FOR THE POSTS OF 'D' GROUP EMPLOYEES**
**(Reservation in appointment for Hyderabad-Karnataka Region)**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | **01** | - | - | - | - | - | - | **01** |
| 02 | Scheduled Tribe | - | - | - | - | - | - | - | **-** |
| 03 | General | - | - | - | - | - | - | - | **-** |
| 04 | Category- I | - | - | - | - | - | - | - | **-** |
| 05 | Category-2A | - | - | - | - | - | - | - | **-** |
| 06 | Category-2B | - | - | - | - | - | - | - | **-** |
| 07 | Category-3A | - | - | - | - | - | - | - | **-** |
| 08 | Category-3B | - | - | - | - | - | - | - | **-** |
| | **Total** | **01** | **-** | **-** | **-** | **-** | **-** | **-** | **01** |

**CLASSIFICATION OF RESERVATION FOR THE POST OF SECURITY GUARD**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | - | - | - | - | - | - | - | **-** |
| 02 | Scheduled Tribe | - | - | - | - | - | - | - | **-** |
| 03 | General | **01** | - | - | - | - | - | - | **01** |
| 04 | Category- I | - | - | - | - | - | - | - | **-** |
| 05 | Category-2A | - | - | - | - | - | - | - | **-** |
| 06 | Category-2B | - | - | - | - | - | - | - | **-** |
| 07 | Category-3A | - | - | - | - | - | - | - | **-** |
| 08 | Category-3B | - | - | - | - | - | - | - | **-** |
| | **Total** | **01** | **-** | **-** | **-** | **-** | **-** | **-** | **01** |

**CLASSIFICATION OF RESERVATION FOR THE POSTS OF 'D' GROUP EMPLOYEES**

| Sl. No. | Reservation | Others | Women | Rural | Ex-service men | Kannada Medium | Project Displaced Persons | Persons with Disabilities | Total |
|---|---|---|---|---|---|---|---|---|---|
| 01 | Scheduled Caste | - | - | 01 | - | - | - | - | **01** |
| 02 | Scheduled Tribe | - | - | - | - | - | - | - | **-** |
| 03 | General | 01 | 01 | 01 | - | - | - | - | **03** |
| 04 | Category- I | - | - | - | - | - | - | - | **-** |
| 05 | Category-2A | - | 01 | - | - | - | - | - | **01** |
| 06 | Category-2B | 01 | - | - | - | - | - | - | **01** |
| 07 | Category-3A | 01 | - | - | - | - | - | - | **01** |
| 08 | Category-3B | - | - | - | - | - | - | - | **-** |
| | **Total** | **03** | **02** | **02** | **-** | **-** | **-** | **-** | **07** |

01. Last date for submission of applications: 30.01.2016
02. **Address for submitting applications**:
    The Secretary, Karnataka Legislative Council Secretariat, Post Box No.5079, 1st floor, Vidhana Soudha, Bengaluru- 560 001.
03. The applicants who are eligible to the above posts as per the Rules of the Karnataka Legislative Council Secretariat should obtain application forms from Government Printing Press and submit it in duplicate before the last date.
04. **Application Fee:**
    a. There is no application fee for Scheduled Castes/Scheduled Tribes and Category-1 Candidates.
    b. General & other OBC candidates for the posts of Kannada/English Reporters and Drivers should pay Rs.300/- and for the posts of Group 'D' and Security Guard should pay Rs.150/- as application fee through DD/Pay Order drawn in favour of "**The Secretary, Karnataka Legislative Council Secretariat, P.O.No:5079, Vidhana Soudha, Bengaluru- 560001**" within 15 days from the date of notification and the application fee will not be returned to candidates at any circumstances.
05. **Educational Qualification:**

| Sl. No. | Name of the Post | Pay Scale | No. of Vacant post | Qualification |
|---|---|---|---|---|
| 01 | Reporters | 20000-500-21000-600-24600-700-28800-800-33600-900-36300 | 16 | **<u>English Reporters:</u>**<br>a) Must be holder of degree from recognized university.<br>b) Must have passed Proficiency Examination in English Shorthand and Senior Typewriting in English conducted by the KSEEB or equivalent examination. Preference being given to the candidates possessing Hindi Proficiency Shorthand.<br>**<u>Kannada Reporters</u>**:<br>a) Must be holder of degree from recognized university<br>b) Must have passed Proficiency Examination in Kannada Shorthand and Senior Typewriting in Kannada conducted by KSEEB or equivalent examination. Preference being given to candidates possessing Hindi Proficiency Shorthand. |
| 02 | Drivers | 11600-200-12000-250-13000-300-14200-350-15600-400-17200-450-19000-500-21000 | 03 | a) Must have passed SSLC or equivalent examination and must have First Aid Certificate<br>b) Must have practical experience to drive a motor car/heavy duty vehicle<br>c) Must have practical experience of driving a motor car for not less than three years |

| Sl. No. | Name of the Post | Pay Scale | No. of Vacant post | Qualification |
|---|---|---|---|---|
| 03 | Security Guard | 9600-200-12000-250-13000-300-14200-350-14550 | 01 | Must have passed 7th standard |
| 04 | Group 'D' | 9600-200-12000-250-13000-300-14200-350-14550 | 08 | Must have passed 7th standard |

06. **Minimum Age limit**: Candidates should complete 18 years as on the last date prescribed for receiving applications.

    **Maximum Age limit.**

    General category : 35 years
    Category IIA, IIB, IIIA and IIIB : 38 years
    SC/ST/ Category -1 : 40 years

    Maximum age limit would be relaxed to the candidates mentioned in Rule 6(3) of the Karnataka Civil Service (General Recruitment) Rules, 1977.
07. The Candidates who are working in Government departments (Government Employees) should submit their applications through their Appointing Authority before the prescribed date.
08. As per the Karnataka Civil Service (General Recruitment) Rules, 1977, only the candidates those who are eligible for the posts of Civil Service will be eligible to apply for these posts.
09. Selected candidates would not be appointed untill Appointing Authority is satisfied that he/she is mentally and physically fit for the posts for which they have been selected.
10. If any candidate brings pressure or influence from any officers or non-officials, he shall not eligible for the appointment of the said posts.
11. Candidates shall enclose the following documents in duplicate along with application form.
    a) A copy containing the details of Date of Birth.
    b) Xerox copies of certificates related to educational qualifications prescribed for the said posts (alongwith xerox copies of marks cards)
    c) Attested copy of Kannada Medium Study Certificate.
    d) Xerox copy of Caste Certificate shall be submitted in the prescribed format.
    e) Recent Character Certificate issued by well known persons as annexed in the application form and Character Certificate issued by respective schools.
    f) Attested copy of Rural Study Certificate from 1st to 10th standard issued by the respective BEOs.
    g) Attested copy of Certificates issued by the concerned Authorities for Ex-servicemen and for the candidates of Hyderabad-Karnataka region.

    **NOTE: Candidates shall not enclose original certificates:**
12. Applications shall be submitted in person or sent by post so as to reach before 4.00 pm. on 30.01.2016 by enclosing all required documents in duplicate in Form-I. If the last date is a General Holiday, applications shall be submitted on the next working day.
13. The Hon'ble Chairman has the power to specify the selection procedure of these posts under the Karnataka Legislative Council Secretariat (Recruitment and conditions of Service) Rules, 2003.

**Instructions:**

01. There is no provision for any letter correspondence after submission of applications.
02. The applications which are not accompanied by the required certificates and that are incomplete or inaccurate will be rejected.
03. Name of the posts shall be mentioned in bold letters on the Application Form.
04. The Applications which are received after the last date will be rejected.

By order of the Hon'ble Chairman

**K.C. PRABHU**
Under Secretary
Karnataka Legislative Council.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) 250 ಪ್ರತಿಗಳು)

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– V | ಬೆಂಗಳೂರು, ಬುಧವಾರ, ಜನವರಿ ೦೬, ೨೦೧೬ (ಪುಷ್ಯ ೧೬, ಶಕ ವರ್ಷ ೧೯೩೭) | ನಂ. ೨೫ |
|---|---|---|
| Part– V | Bengaluru, Wednesday, January 06, 2016 (Pushya 16, Shaka Varsha 1937) | No. 25 |



**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ. ಒಇ 6 ಪೊಸಿಇ 2016, ಬೆಂಗಳೂರು ದಿನಾಂಕ: 06.01.2016**

**ಪೊಲೀಸ್ ಇಲಾಖೆ**

**POLCET-2015**

**(ISO: 9001-2008 ಪ್ರಮಾಣಿತ ನೇಮಕಾತಿ ಪ್ರಕ್ರಿಯೆ)**

**ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್ (ಪುರುಷ) ಹುದ್ದೆಗಳ ನೇಮಕಾತಿ**

**ಅಧಿಸೂಚನೆ ಸಂಖ್ಯೆ: 30/ನೇಮಕಾತಿ–4/2015–16.**

ವಿಷಯ: ಕರ್ನಾಟಕ ರಾಜ್ಯದಲ್ಲಿ ಖಾಲಿ ಇರುವ ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್ (ಪುರುಷ) ಹುದ್ದೆಗಳ ವಿಶೇಷ ನೇರ ನೇಮಕಾತಿ ಕುರಿತು.

~*~*~*~

1. ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯಲ್ಲಿ ಖಾಲಿ ಇರುವ ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್ (ಪುರುಷ) ಖಾಲಿ ಹುದ್ದೆಗಳ ನೇರ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ನೌಕರರ ಸೇವೆಗಳು ಸೇರಿದಂತೆ (ನೇಮಕಾತಿ) ನಿಯಮ 2004 ಮತ್ತು ಅದರ (ತಿದ್ದುಪಡಿ) ನಿಯಮ, 2009, ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನು ಒಳಗೊಂಡ (ನೇಮಕಾತಿ) (ತಿದ್ದುಪಡಿ) ನಿಯಮಗಳು 2014, ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013, ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು, 2013 ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ಹಾಗೂ ಮೇಲೆ ತಿಳಿಯಪಡಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಈ ಅಧಿಸೂಚನೆಯನ್ನು ಪ್ರಕಟಿಸುತ್ತ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.**

**ವಿಶೇಷ ಸೂಚನೆ : ಅರ್ಹ ಅಭ್ಯರ್ಥಿಗಳು "ಅನುಬಂಧ–ಎ" ರಲ್ಲಿ ನೀಡಲಾಗಿರುವ ಖಾಲಿ ಹುದ್ದೆಗಳ ವರ್ಗೀಕರಣವನ್ನು ನೋಡಿ ಅರ್ಜಿ ಸಲ್ಲಿಸುವಂತೆ ಸೂಚಿಸಲಾಗಿದೆ.**

**2. ಶುಲ್ಕ:**

| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹ 250/– |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ | ₹ 100/– |

ನಿಗದಿತ ಶುಲ್ಕವನ್ನು State Bank of Mysuru / State Bank of Hyderabad ಗಳ ಅಧಿಕೃತ ಶಾಖೆಗಳಲ್ಲಿ ಬ್ಯಾಂಕಿನ ಕಛೇರಿ ವೇಳೆಯಲ್ಲಿ ಚಲನ್ ನೀಡಿ ಶುಲ್ಕ ಪಾವತಿಸಬೇಕು.

ಟಿಪ್ಪಣಿ: ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ನಮೂದಿಸಿದಂತೆ ಅಭ್ಯರ್ಥಿಗೆ ಅನ್ವಯಿಸುವ ಶುಲ್ಕವನ್ನು **ನಗದು ರೂಪದಲ್ಲಿ ಮಾತ್ರ** ಮೇಲೆ ನಮೂದಿಸಿದ

ಅಧಿಕೃತ ಬ್ಯಾಂಕಿನ ಶಾಖೆಗಳಲ್ಲಿ ಪಾವತಿಸತಕ್ಕದ್ದು. (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ನೀಡಲಾಗಿದೆ). **ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

**3. ಆನ್–ಲೈನ್ (On-line) ಮುಖಾಂತರ ಅರ್ಜಿ ಸಲ್ಲಿಸುವ ಹಾಗೂ ಶುಲ್ಕ ಪಾವತಿಸುವ ವಿಧಾನ :**

ಅರ್ಜಿದಾರ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಧಿಕೃತ ವೆಬ್‌ಸೈಟ್‌ನಲ್ಲಿರುವ ಮಾಹಿತಿಸೂಚಿ/ಸೂಚನೆಗಳನ್ನು ಜಾಗರೂಕತೆಯಿಂದ ಓದಿಕೊಂಡು ಭರ್ತಿ ಮಾಡಬೇಕು. ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ನೀಡಲಾಗಿರುವ ಸೂಚನೆಗಳನ್ನು ಓದಿಕೊಂಡು ಇರುವ ಅರ್ಜಿಯನ್ನು ಆನ್‌ಲೈನ್ ಮುಖಾಂತರ ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದ್ದಲ್ಲಿ ಅಂತಹವರ ವಿರುದ್ಧ ಕಾನೂನಿನನ್ವಯ ನೇಮಕಾತಿ ಸಮಿತಿಯು ಸೂಕ್ತ ಕ್ರಮ ಕೈಗೊಳ್ಳುವುದು. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅರ್ಜಿದಾರ ಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರವನ್ನು ಮತ್ತು ಸಹಿಯನ್ನು ಪ್ರತ್ಯೇಕವಾಗಿ (Soft Copy - less than 250 KB) ಸ್ಕ್ಯಾನ್ ಮಾಡಿಟ್ಟುಕೊಂಡಿರಬೇಕು. ನಂತರ ಅರ್ಜಿದಾರನ ಹೆಸರು, ಜಾತಿ, ಮೀಸಲಾತಿಗಳ ವಿವರ, ಹುಟ್ಟಿದ ದಿನಾಂಕ ಮತ್ತು ಇತ್ಯಾದಿ ವಿವರಗಳನ್ನು ಭರ್ತಿ ಮಾಡಿ ಕೊನೆಯದಾಗಿ ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ ಮತ್ತು ಸಹಿಯನ್ನು ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload) ಮಾಡುವುದು. ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅರ್ಜಿದಾರ ನೀಡಿರುವ ವಿವರಗಳು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದಲ್ಲಿ ಮಾತ್ರ ಚಲನ್ ಮುದ್ರಿಸಬಹುದು. ಚಲನ್ ಮುದ್ರಿಸಲು ಜನರೇಟ್ ಚಲನ್ ಬಟನ್ ಮೇಲೆ ಕ್ಲಿಕ್ ಮಾಡಿದಾಗ ತ್ರಿಪತಿ (Triplicate) ಬ್ಯಾಂಕ್ ಚಲನ್ ಸೃಜನೆಯಾಗುತ್ತದೆ. ಆ ಚಲನ್‌ನಲ್ಲಿ ಅರ್ಜಿಯ ಸಂಖ್ಯೆಯೊಂದಿಗೆ, ಆಯ್ಕೆ ಮಾಡಿರುವ ಘಟಕ, ನಿಮ್ಮ ಭಾವಚಿತ್ರ, ಪ್ರವರ್ಗ, ಮೀಸಲಾತಿಗಳ ವಿವರ ಮತ್ತು ಪಾವತಿಸಬೇಕಾಗಿರುವ ನಿಗದಿತ ಶುಲ್ಕಗಳ ವಿವರಗಳು ಇರುತ್ತವೆ. ಆ ಚಲನ್ ಪ್ರತಿಯನ್ನು ಮುದ್ರಿಸಿ/ಪ್ರಿಂಟ್ ಮಾಡಿಕೊಳ್ಳತಕ್ಕದ್ದು.

ನಂತರ ಅರ್ಜಿದಾರ ಮುದ್ರಿಸಿಕೊಳ್ಳಲಾದ ಚಲನ್‌ನಲ್ಲಿ ನಮೂದಾಗಿರುವ ಒಟ್ಟು ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿಯೇ ಅಧಿಕೃತ ಎಸ್.ಬಿ.ಎಂ ಅಥವಾ ಎಸ್.ಬಿ.ಹೆಚ್ ಬ್ಯಾಂಕ್ ಶಾಖೆಗಳಲ್ಲಿ ಪಾವತಿಸಬೇಕು. ಶುಲ್ಕ ಪಾವತಿಸಿದ ನಂತರ ಚಲನ್‌ನ 'ಅಭ್ಯರ್ಥಿ ಪ್ರತಿ'ಯನ್ನು ಇಟ್ಟುಕೊಂಡಿರತಕ್ಕದು.

ಅಭ್ಯರ್ಥಿಯು ಶುಲ್ಕ ಪಾವತಿಸಿದ ಮರುದಿನ ಪುನಃ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ My Application ನ್ನು ಕ್ಲಿಕ್ ಮಾಡಿ, ತಮ್ಮ ಅರ್ಜಿ ಸಂಖ್ಯೆ ಮತ್ತು ಜನ್ಮ ದಿನಾಂಕ ನಮೂದಿಸಿದ ನಂತರವೇ ಅರ್ಜಿ ತೆರೆಯುತ್ತದೆ ಹಾಗೂ ಅಭ್ಯರ್ಥಿಯು ಭರ್ತಿ ಮಾಡಿರುವ ಎಲ್ಲಾ ವಿವರಗಳನ್ನು ಒಳಗೊಂಡಂತೆ ಅರ್ಜಿಯು ಸೃಜನೆಯಾಗುತ್ತದೆ. ಸದರಿ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಅರ್ಜಿ ಪ್ರತಿ ಮತ್ತು ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ.

- **ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ: 07.01.2016, ಬೆಳಿಗ್ಗೆ 10.00 ಗಂಟೆಯಿಂದ**
- **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: : 05.02.2016, ಸಂಜೆ 06.00 ಗಂಟೆಯವರೆಗೆ**
- **ಅಧಿಕೃತ ಬ್ಯಾಂಕ್ ಶಾಖೆಗಳ ಕಛೇರಿ ವೇಳೆಯಲ್ಲಿ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 06.02.2016.**

**ಸೂಚನೆ:**

- ಪೊಲೀಸ್ ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಿ, ನಿಗದಿತ ದಿನಾಂಕದೊಳಗೆ ಸಲ್ಲಿಸಲಾಗುವ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು.
- ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 080–22943346 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು. ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಎದುರಾದಲ್ಲಿ ಅದನ್ನು ಸ್ಥಗಿತಗೊಳಿಸಿ ಮತ್ತೊಮ್ಮೆ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಲು ತಿಳಿಸಲಾಗಿದೆ.

**ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.**

| **ಪೊಲೀಸ್ ಕಾನ್‌ಸ್ಟೇಬಲ್** | **1638** |
|---|---|

(ಮೇಲೆ ನಮೂದಿಸಿರುವ ಖಾಲಿ ಹುದ್ದೆಗಳ ವರ್ಗೀಕರಣಕ್ಕೆ ಅನುಬಂಧ–'ಎ' ಅನ್ನು ನೋಡಿ)

**4. ಅರ್ಹತಾ ಷರತ್ತುಗಳು :**

i) ಭಾರತೀಯ ನಾಗರಿಕನಾಗಿರತಕ್ಕದ್ದು.

ii) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ, ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**5. <u>ವಯೋಮಿತಿ</u> :**

i) **ಸಾಮಾನ್ಯ ಅಭ್ಯರ್ಥಿಗಳಿಗೆ:**

ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 05.02.2016ಕ್ಕೆ ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 27 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ 25 ವರ್ಷಗಳು.

ಇ) ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳಿಗೆ 30 ವರ್ಷಗಳು.

**ಟಿಪ್ಪಣಿ:**

**"ಬುಡಕಟ್ಟು"** ಎಂದರೆ "ಉತ್ತರ ಕನ್ನಡ ಕಾರವಾರ, ದಕ್ಷಿಣ ಕನ್ನಡ ಮಂಗಳೂರು, ಉಡುಪಿ, ಚಿಕ್ಕಮಗಳೂರು, ಶಿವಮೊಗ್ಗ, ಕೊಡಗು, ಚಾಮರಾಜನಗರ ಮತ್ತು ಮೈಸೂರು ಅರಣ್ಯಗಳಲ್ಲಿ ಸಿದ್ದಿಗರು, ಜೇನುಕುರುಬ, ಕಾಡುಕುರುಬ, ಯೆರವ, ಸೋಲಿಗ, ಕುಡಿಯ, ಗೌಡ್ಲು, ಹಸಲರು, ಮಲೈಕುಡಿಯ ಮತ್ತು ಕೊರಗ ಬುಡಕಟ್ಟು ಸಮುದಾಯಗಳಿಗೆ ಸೇರಿದ ಅಭ್ಯರ್ಥಿಗಳು".

ii) **ಮಾಜಿ ಸೈನಿಕ ಅಭ್ಯರ್ಥಿಗಳಿಗೆ :**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ" ಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

iii) **ಮಾಜಿ ಸೈನಿಕರ ಬಗ್ಗೆ ವಿವರಣೆ:**

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಯಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್ (General Reserved Engineering Force), ಲೋಕ್ ಸಹಾಯಕ್ ಸೇನಾ (Lok Sahayak Sena) ಮತ್ತು ಪ್ಯಾರಾ ಮಿಲಿಟರಿ ದಳ (Para Military Forces) ದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

೧. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

೨. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

೩. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರಿಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

iv) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ 02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಅಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒಇ/90/ಪೊಸಿಅ/2005, ದಿನಾಂಕ 02.02.2006ರ ಪತ್ರದಲ್ಲಿ ದಿನಾಂಕ 02.05.1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. ಈ ವಿಷಯದ ಕುರಿತು ವೃಂದ ಮತ್ತು ನೇಮಕಾತಿ ನಿಯಮವಾದ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳು ಸೇರಿದಂತೆ (ನೇಮಕಾತಿ) (ತಿದ್ದುಪಡಿ) ನಿಯಮ, 2009 ರಲ್ಲಿಯೂ ಸಹ ನಿಗದಿಪಡಿಸಲಾಗಿದೆ. ಆದ್ದರಿಂದ ಒಂದು ಬಾರಿ ಮಾಜಿ ಸೈನಿಕ ಮೀಸಲಾತಿಯನ್ನು ಉಪಯೋಗಿಸಿ ಸರ್ಕಾರಿ ಹುದ್ದೆಗೆ ಆಯ್ಕೆಯಾದ ಮಾಜಿ ಸೈನಿಕರು ಮತ್ತೊಮ್ಮೆ ಸದರಿ ಮೀಸಲಾತಿಯನ್ನು ಕೋರಲು ಬರುವುದಿಲ್ಲ. ಅಂತಹ ಮಾಜಿ ಸೈನಿಕ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. **(ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಅರ್ಜಿಯಲ್ಲಿ ನಿಗದಿಪಡಿಸಲಾಗಿರುವ ಕಾಲಂನ್ನು ಭರ್ತಿ ಮಾಡತಕ್ಕದ್ದು ಹಾಗೂ ಭೂಸೇನೆ/ನೌಕಾಸೇನೆ/ವಾಯುಸೇನೆಯಲ್ಲಿ ಸೇವೆ ಸಲ್ಲಿಸಿದಷ್ಟು ಅವಧಿಯನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು)**

v) ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಅಭ್ಯರ್ಥಿಯು ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಸಂಬಂಧಪಟ್ಟ ಪೊಲೀಸ್ ಅಧೀಕ್ಷಕರು ಕಛೇರಿಗೆ ಮಾಹಿತಿ ನೀಡತಕ್ಕದ್ದು. ಮಾಹಿತಿ ನೀಡದೆ ತದನಂತರ ತಿಳಿದುಬಂದಲ್ಲಿ ಅಂತಹ ಮಾಜಿ ಸೈನಿಕ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

vi) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

vii) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮ 9(1) ರನ್ವಯ ಕೇಂದ್ರ ಸಶಸ್ತ್ರದಳದಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ಸಹಿಷ್ಣುತೆ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ. ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ **ದಿನಾಂಕ: 05.02 .2016** ರೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:** ಮೇಲಿನ ಷರತ್ತಿನ ಪ್ರಕಾರ ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೇ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

**6. ವಿದ್ಯಾರ್ಹತೆ:**

ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್ (ಪುರುಷ) ಹುದ್ದೆಗಳ ಆಯ್ಕೆಯ ಸಲುವಾಗಿ ಕಂಡಿಕೆ 1ರಲ್ಲಿ ನಮೂದಿಸಿರುವ ವೃಂದ ಮತ್ತು ನೇಮಕಾತಿ (ತಿದ್ದುಪಡಿ) ನಿಯಮ 2009ರ ಪ್ರಕಾರ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. / 10ನೇ ತರಗತಿ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ, ಅಂದರೆ 05.02.2016ಕ್ಕೆ ಹೊಂದಿರಬೇಕು. (ಮಾಜಿ ಸೈನಿಕ ಅಭ್ಯರ್ಥಿಗಳು ವಿದ್ಯಾರ್ಹತೆಯ ಪ್ರಮಾಣ ಪತ್ರವನ್ನು ದಿನಾಂಕ:05.02.2016 ರೊಳಗೆ ಹೊಂದಿದ್ದರೆ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು).

ಟಿಪ್ಪಣಿ :

i) ಮೇಲೆ ನಮೂದಿಸಿದಂತೆ ವಿದ್ಯಾರ್ಹತೆಯನ್ನು / ಶೇಕಡ ಅಂಕಗಳನ್ನು ಹೊಂದದೇ ಇರುವ ಅಭ್ಯರ್ಥಿಗಳು ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದರೆ ನಂತರ ನೇಮಕಾತಿ ಸಮಿತಿಗೆ ವಿದ್ಯಾರ್ಹತೆ / ಶೇಕಡ ಅಂಕಗಳನ್ನು ಹೊಂದಿರುವುದಿಲ್ಲವೆಂದು ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಯಾವುದೇ ಹಂತದಲ್ಲಾದರೂ ರದ್ದು ಪಡಿಸಲಾಗುವುದು.

ii) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತುಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 05.02.2016 ರೊಳಗೆ ಎಲ್ಲಾ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ./10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯ ಅಂಕಪಟ್ಟಿಯನ್ನು ಹೊಂದಿರಬೇಕು.

**7. ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ :**

**ಎ) ತರಬೇತಿ:**

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಡಿಜಿ ಮತ್ತು ಐಜಿಪಿ ರವರು ಕಾಲ ಕಾಲಕ್ಕೆ ನಿರ್ದಿಷ್ಟ ಪಡಿಸಿದ ಪೊಲೀಸ್ ತರಬೇತಿ ಶಾಲೆಗಳಲ್ಲಿ ಮೂಲ ತರಬೇತಿಯನ್ನು ಪಡೆಯಬೇಕು. ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು. ಅನುತ್ತೀರ್ಣರಾದ ಅಭ್ಯರ್ಥಿಗಳನ್ನು ಸೇವೆಯಿಂದ ವಜಾಗೊಳಿಸಲಾಗುವುದು.

ಬಿ) **ಖಾಯಂಪೂರ್ವ ಅವಧಿ:**

ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳು ಎರಡು ವರ್ಷ ಆರು ತಿಂಗಳು ಖಾಯಂ ಪೂರ್ವ ಅವಧಿಯಲ್ಲಿರುತ್ತಾರೆ.

ಸಿ) **ವೇತನ ಶ್ರೇಣಿ:**

₹. 11600–200–12000–250–13000–300–14200–350–15600–400–17200–450–19000–500–21000

ಡಿ) **ಪಿಂಚಣಿ ಸೌಲಭ್ಯ :**

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006 ರಂತೆ ನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

**8. ಸಹಿಷ್ಣುತೆ ಪರೀಕ್ಷೆ (Endurance Test) ಮತ್ತು ದೇಹದಾರ್ಢ್ಯತೆ ಪರೀಕ್ಷೆ (Physical Standard Test):**

**ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತು ಪಡಿಸಲಾಗುವುದು ಹಾಗೂ ಪೊಲೀಸ್ ಇಲಾಖೆಯ ವೆಬ್‌ಸೈಟ್ "http://www.ksp.gov.in" ನಲ್ಲಿ ಪ್ರಕಟಿಸಲಾಗುವುದು. ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಹೊಂದಿರುವ ಪ್ರವೇಶ/ಕರೆ ಪತ್ರಗಳನ್ನು ಪೊಲೀಸ್ ಇಲಾಖೆಯ ಅಂತರ್ಜಾಲದಿಂದ ಅಭ್ಯರ್ಥಿಗಳು ಕಡ್ಡಾಯವಾಗಿ ಡೌನ್ ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ರವಾನಿಸಲಾಗುವುದಿಲ್ಲ. ಪ್ರವೇಶ ಪತ್ರವಿಲ್ಲದೇ ಇ.ಟಿ. ಮತ್ತು ಪಿ.ಎಸ್.ಟಿ. ಪರೀಕ್ಷೆಗಳಿಗೆ ಅನುವು ಮಾಡಲಾಗುವುದಿಲ್ಲ. ಈ ಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksp.gov.in ನ್ನು ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ.**

ಎ) ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳನ್ನು ಸಂಬಂಧಪಟ್ಟ ಪೊಲೀಸ್ ಅಧೀಕ್ಷಕರ ಕಛೇರಿಯು ನಿಗದಿಪಡಿಸಿದ ಸ್ಥಳದಲ್ಲಿ ನಡೆಸಲಾಗುವುದು. ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ. ಆದ್ದರಿಂದ ಅಭ್ಯರ್ಥಿಗಳು ಇಲಾಖೆಯ ವೈಬ್‌ಸೈಟ್‌ನ್ನು ದಿನ ನಿತ್ಯ ನೋಡಲು ತಿಳಿಸಲಾಗಿದೆ.

ಬಿ) ದೈಹಿಕ ಪರೀಕ್ಷೆಯು ನಡೆಯುವ ವೇಳೆ ಮತ್ತು ಸ್ಥಳವನ್ನು ಸಂಬಂಧಪಟ್ಟ ದೈಹಿಕ ಪರೀಕ್ಷೆಯ ಕೇಂದ್ರಗಳ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ದೈಹಿಕ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ.

ದೈಹಿಕ ಪರೀಕ್ಷೆಗೆ ಬರುವಾಗ ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

- i) ಪಾಸ್‌ಪೋರ್ಟ್ (Passport)
- ii) ಚಾಲನಾ ಪರವಾನಗಿ ಪತ್ರ (Driving License)
- iii) ಪ್ಯಾನ್ ಕಾರ್ಡ್ (PAN Card)
- iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)
- v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)
- vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)
- vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Caste Certificate with Photo)
- viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen's pension book/pension payment order)
- ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)
- x) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).
- xi) ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್.(AADHAR CARD).

ಸಿ) ಕರೆಪತ್ರದ ಜೊತೆಗೆ ಆನ್‌ಲೈನ್ ಮುಖಾಂತರ ಸಲ್ಲಿಸಿದ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ಸಹ ತರತಕ್ಕದ್ದು, ತಪ್ಪಿದ್ದಲ್ಲಿ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ. ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಅಂತಹವರನ್ನು ಅನರ್ಹ ಗೊಳಿಸಲಾಗುವುದು ಹಾಗೂ ಬದಲಿ ದಿನಾಂಕವನ್ನು ನೀಡಲಾಗುವುದಿಲ್ಲ.

ಡ) **<u>ಸಹಿಷ್ಣುತೆ ಪರೀಕ್ಷೆ</u> : (Endurance Test)**

i) ದೇಹದಾರ್ಢ್ಯತೆ ಪರೀಕ್ಷೆಗೆ ಅರ್ಹರಾಗಲು ಅಭ್ಯರ್ಥಿಗಳು ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಹಾಗೂ ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳನ್ನು ಈ ಕೆಳಗೆ ನಮೂದಿಸಿರುವ ಕ್ರಮದಲ್ಲಿಯೇ ಭಾಗವಹಿಸುವುದು ಕಡ್ಡಾಯವಾಗಿರುತ್ತದೆ. ಈ ಪರೀಕ್ಷೆಗಳಲ್ಲಿ ಭಾಗವಹಿಸುವುದನ್ನು ತಿರಸ್ಕರಿಸುವವರು/ ವಿಫಲವಾಗುವವರು ಅನರ್ಹತೆಗೆ ಒಳಗಾಗುವರು. ಪ್ರತಿಯೊಂದು ಸಹಿಷ್ಣುತೆ ಪರೀಕ್ಷೆ ಮುಗಿದ ನಂತರ ನಿಗದಿತ ನಮೂನೆಗೆ ಅಭ್ಯರ್ಥಿಯು ಭರ್ತಿ ಮಾಡಿರುವ ವಿವರಗಳನ್ನು ಪರಿಶೀಲಿಸಿ ಸಹಿ ಹಾಕಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಯು ಅನರ್ಹತೆಗೊಳಗಾಗುವನು. ಸಹಿಷ್ಣುತೆ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇವು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತದೆ.

ii) **<u>ಸಹಿಷ್ಣುತೆ ಪರೀಕ್ಷೆಯಲ್ಲಿರುವ ಅಂಶಗಳು ಹಾಗೂ ಅರ್ಹತಾ ವೇಳೆ/ ದೂರದ ವಿವರಗಳು ಈ ಕೆಳಕಂಡಂತಿರುತ್ತದೆ ಮತ್ತು ಅವುಗಳನ್ನು ನಮೂದಿಸಲಾಗಿರುವ ಕ್ರಮದಲ್ಲಿಯೇ ನಡೆಸಲಾಗುವುದು:</u>**

| **ಸಹಿಷ್ಣುತೆ ಪರೀಕ್ಷೆ** | | |
|---|---|---|
| | **ಅಂಶಗಳು** | **ಅರ್ಹತಾ ವೇಳೆ / ದೂರ** |
| ಎಲ್ಲಾ ಸಾಮಾನ್ಯ ಅಭ್ಯರ್ಥಿಗಳಿಗೆ | 1600 ಮೀಟರ್ ಓಟ | 6 ನಿಮಿಷ |
| | ಎತ್ತರ ಜಿಗಿತ <u>ಅಥವಾ</u> ಉದ್ದ ಜಿಗಿತ | 1.20 ಮೀಟರ್‌ಗಿಂತ ಕಡಿಮೆ ಇಲ್ಲದಂತೆ <u>ಅಥವಾ</u> 3.80 ಮೀಟರ್‌ಗಿಂತ ಕಡಿಮೆ ಇಲ್ಲದಂತೆ (3 ಅವಕಾಶಗಳು ಮಾತ್ರ) |
| | ಗುಂಡು ಎಸೆತ (7.26 ಕೆ.ಜಿ.) | 5.60 ಮೀಟರ್‌ಗಿಂತ ಕಡಿಮೆ ಇಲ್ಲದಂತೆ (3 ಅವಕಾಶಗಳು ಮಾತ್ರ) |
| ಮಾಜಿ ಸೈನಿಕ ಅಭ್ಯರ್ಥಿಗಳಿಗೆ | 400 ಮೀಟರ್ ಓಟ | 2 ನಿಮಿಷಕ್ಕಿಂತ ಮೀರದಂತೆ |
| | ಎತ್ತರ ಜಿಗಿತ <u>ಅಥವಾ</u> ಉದ್ದ ಜಿಗಿತ | 0.90 ಮೀಟರ್‌ಗಿಂತ ಕಡಿಮೆ ಇಲ್ಲದಂತೆ <u>ಅಥವಾ</u> 2.50 ಮೀಟರ್‌ಗಿಂತ ಕಡಿಮೆ ಇಲ್ಲದಂತೆ (3 ಅವಕಾಶಗಳು ಮಾತ್ರ) |
| | ಗುಂಡು ಎಸೆತ (4 ಕೆ.ಜಿ.) | 3.75 ಮೀಟರ್‌ಗಿಂತ ಕಡಿಮೆ ಇಲ್ಲದಂತೆ (3 ಅವಕಾಶಗಳು ಮಾತ್ರ) |

| **ದೇಹದಾರ್ಢ್ಯತೆ ಪರೀಕ್ಷೆ (ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹಗೊಂಡ ಅಭ್ಯರ್ಥಿಗಳಿಗೆ ಮಾತ್ರ)** | |
|---|---|
| ಎಲ್ಲಾ ಸಾಮಾನ್ಯ ಮತ್ತು * ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ***<u>ಕನಿಷ್ಠ ಎತ್ತರ</u>*** : 168 ಸೆಂ. ಮೀ. ***<u>ಕನಿಷ್ಠ ಎದೆ ಸುತ್ತಳತೆ</u>*** : 86 ಸೆಂ. ಮೀ (ಪೂರ್ತಿ ವಿಸ್ತರಿಸಿದಾಗ) ಕನಿಷ್ಟ ವಿಸ್ತರಣೆ 5 ಸೆಂ. ಮೀ. |

| ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಪುರುಷ ಅಭ್ಯರ್ಥಿಗಳಿಗೆ | ***<u>ಕನಿಷ್ಠ ಎತ್ತರ</u>*** : 155 ಸೆಂ. ಮೀ. ***<u>ಎದೆ ಸುತ್ತಳತೆ</u>*** : 5 ಸೆಂ.ಮೀ.ಗಳ ಕನಿಷ್ಠ ವಿಸ್ತರಿಸುವುದರೊಂದಿಗೆ ಸಂಪೂರ್ಣವಾಗಿ ಹಿಗ್ಗಿಸಿದಾಗ 75 ಸೆಂ.ಮೀ.ಗಳಿಗಿಂತ ಕಡಿಮೆ ಇಲ್ಲದಂತೆ. |
|---|---|

**<u>ವಿಶೇಷ ಸೂಚನೆ :–</u>**

**ಸಹಿಷ್ಣುತೆ ಪರೀಕ್ಷೆಗೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ದೈಹಿಕವಾಗಿ ಸದೃಢರಿರಬೇಕು. ಸಹಿಷ್ಣುತೆ ಪರೀಕ್ಷೆಯ ಸಂದರ್ಭದಲ್ಲಿ ಸಂಭವಿಸುವ ಯಾವುದೇ ರೀತಿಯ ಅನಾಹುತ/ ತೊಂದರೆಗಳಿಗೆ ಪೊಲೀಸ್ ಇಲಾಖೆ/ ನೇಮಕಾತಿ ಸಮಿತಿಯು ಜವಾಬ್ದಾರರಾಗಿರುವುದಿಲ್ಲ. ಅಭ್ಯರ್ಥಿಗಳು ಅವರ ಸ್ವಂತ ಹಿತ ದೃಷ್ಟಿಯಿಂದ ಅವರ ದೇಹದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿಕೊಂಡು, ಅಭ್ಯರ್ಥಿಯ ಆರೋಗ್ಯವು ಎಲ್ಲ ರೀತಿಯಿಂದಲೂ ಸದೃಢವಾಗಿದೆ ಎಂದು ಖಚಿತ ಪಡಿಸಿಕೊಂಡು ಇಲಾಖೆ ನಡೆಸುವ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗೆ ಎಲ್ಲ ವಿಧದಿಂದಲೂ ಅರ್ಹನೆಂದು ಮುಂಚಿತವಾಗಿಯೇ ತಿಳಿದುಕೊಂಡು ಹಾಜರಾಗತಕ್ಕದ್ದು. ಈ ದಿಸೆಯಲ್ಲಿ ಕನಿಷ್ಠ ಒಂದು ತಿಂಗಳ ಮುಂಚೆಯಿಂದಲೇ ಸಹಿಷ್ಣುತೆ ಪರೀಕ್ಷೆಗೆ ಅಭ್ಯರ್ಥಿಗಳು ಸಾಕಷ್ಟು ಅಭ್ಯಾಸ ಮಾಡಿಕೊಳ್ಳತಕ್ಕದ್ದು.**

ಟಿಪ್ಪಣಿ :

i) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಒಂದು ದೈಹಿಕ ಪರೀಕ್ಷೆಯ ಸಮಿತಿಯು ನಡೆಸುತ್ತದೆ. ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ. ದೈಹಿಕ ಪರೀಕ್ಷೆಯ ಸಮಿತಿಯು ನೀಡುವ ಫಲಿತಾಂಶವೇ ಅಂತಿಮವಾಗಿರುತ್ತದೆ.

ii) ಸಹಿಷ್ಣತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆ ಪೂರ್ಣಗೊಂಡ ನಂತರ ಅಭ್ಯರ್ಥಿಗಳು ದೈಹಿಕ ಪರೀಕ್ಷೆ ಸಮಿತಿ ಸಮ್ಮುಖದಲ್ಲಿ ನಿಗದಿತ ನಮೂನೆಗೆ ಸಹಿ ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು. ಇಲ್ಲವಾದರೆ ಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

